# ಝುಬೈರ್ ಬಿನ್ ಅವ್ವಾಮ್(ರ)

## ಝುಬೈರ್ ಬಿನ್ ಅವ್ವಾಮ್ ಅಲ್-ಕುರಶೀ ಅಲ್-ಅಸದೀ

ಜನನ ಕ್ರಿ.ಶ. 594 (ಹಿಜರಿ ಪೂರ್ವ 28) - ಮರಣ ಕ್ರಿ.ಶ. 656 (ಹಿಜರಿ ಶಕೆ 36)

## ☆ ವಿಶೇಷತೆಗಳು:

- ಸ್ವರ್ಗದ ಸುವಾರ್ತೆ ಪಡೆದ ಹತ್ತು ಸಹಾಬಿಗಳಲ್ಲಿ ಒಬ್ಬರು.
- ಪ್ರವಾದಿ(ಸ) ರವರ ಅತ್ತೆಯ ಮಗ ಮತ್ತು ಪತ್ನಿ ಖದೀಜ(ರ) ರ ಸಹೋದರ ಪುತ್ರ.
- ಪ್ರಾರಂಭದಲ್ಲೇ ಇಸ್ಲಾಮ್ ಸ್ವೀಕರಿಸಿದವರಲ್ಲಿ ಒಬ್ಬರು.
- ಇಸ್ಲಾಮಿನಲ್ಲಿ ಪ್ರಪ್ರಥಮ ಬಾರಿಗೆ ಖಡ್ಗವನ್ನು ಎತ್ತಿದವರು.

- ಉಮರ್(ರ) ತಮ್ಮ ನಂತರ ಖಲೀಫ ಆಗಲು ಆರಿಸಿದ ಆರು ಜನರಲ್ಲಿ ಒಬ್ಬರು.
- ಪ್ರವಾದಿ(ಸ) ರವರಿಂದ 'ಹವಾರಿ' ಎಂಬ ಹೆಸರನ್ನು ಪಡೆದವರು.

## ☆ ವಂಶ:

**ತಂದೆ:** ಅವ್ವಾಮ್ ಬಿನ್ ಖುವೈಲಿದ್ ಬಿನ್ ಅಸದ್ ಬಿನ್ ಅಬ್ದುಲ್ ಉಝ್ಝ ಬಿನ್ ಕುಸೈ ಬಿನ್ ಕಿಲಾಬ್ ಬಿನ್ ಮುರ್ರ ಬಿನ್ ಕಅಬ್ ಬಿನ್ ಲುಅಯ್ ಬಿನ್ ಗಾಲಿಬ್ ಬಿನ್ ಫಿಹ್ರ್ ಬಿನ್ ಮಾಲಿಕ್ ಬಿನ್ ನದ್ರ್ (ಕುರೈಶ್) ಬಿನ್ ಕಿನಾನ ಬಿನ್ ಖುಝೈಮ ಬಿನ್ ಮುದ್ರಿಕ ಬಿನ್ ಇಲ್ಯಾಸ್ ಬಿನ್ ಮುದರ್ ಬಿನ್ ನಿಝಾರ್ ಬಿನ್ ಮಅದ್ ಬಿನ್ ಅದ್ನಾನ್. ಇವರು ಪ್ರವಾದಿ(ಸ) ರವರ ಪತ್ನಿ ಖದೀಜ(ರ) ಸಹೋದರ.

**ತಾಯಿ:** ಸಫಿಯ್ಯ ಬಿನ್ತ್ ಅಬ್ದುಲ್ ಮುತ್ತಲಿಬ್ ಬಿನ್

ಹಾಶಿಮ್ ಬಿನ್ ಅಬ್ದುಮನಾಫ್ ಬಿನ್ ಕುಸೈ ಬಿನ್ ಕಿಲಾಬ್ ಬಿನ್ ಮುರ್ರ ಬಿನ್ ಕಅಬ್ ಬಿನ್ ಲುಅಯ್ ಬಿನ್ ಗಾಲಿಬ್ ಬಿನ್ ಫಿಹ್ರ್ ಬಿನ್ ಮಾಲಿಕ್ ಬಿನ್ ನದ್ರ್ (ಕುರೈಶ್) ಬಿನ್ ಕಿನಾನ ಬಿನ್ ಖುಝೈಮ ಬಿನ್ ಮುದ್ರಿಕ ಬಿನ್ ಇಲ್ಯಾಸ್ ಬಿನ್ ಮುದರ್ ಬಿನ್ ನಿಝಾರ್ ಬಿನ್ ಮಅದ್ ಬಿನ್ ಅದ್ನಾನ್. ಇವರು ಪ್ರವಾದಿ(ಸ) ರವರ ಅತ್ತೆ.

ಝುಬೈರ್(ರ) ರವರ ವಂಶಾವಳಿಯು ನಾಲ್ಕನೇ ಪಿತಾಮಹ ಕುಸೈರಲ್ಲಿ ಪ್ರವಾದಿ(ಸ) ರೊಂದಿಗೆ ಸಂಧಿಸುತ್ತದೆ.

## ☆ ಜನನ ಮತ್ತು ಬೆಳವಣಿಗೆ:

ಝುಬೈರ್(ರ) ಮಕ್ಕಾದಲ್ಲಿ ಹುಟ್ಟಿದರು. ಅವರು ಅನಾಥರಾಗಿ ಬೆಳೆದರು. ಅವರ ತಂದೆ ಅವ್ವಾಮ್ ಜಾಹಿಲೀಕಾಲದಲ್ಲಿ ನಡೆದ ಫಿಜಾರ್ ಯುದ್ಧದಲ್ಲಿ

ಮಡಿದಿದ್ದರು.

## ☆ ಇಸ್ಲಾಮ್ ಸ್ವೀಕಾರ:

ಝುಬೈರ್(ರ) ಚಿಕ್ಕ ಪ್ರಾಯದಲ್ಲೇ ಇಸ್ಲಾಮ್ ಸ್ವೀಕರಿಸಿದರು. ಇಸ್ಲಾಮ್ ಸ್ವೀಕರಿಸುವಾಗ ಅವರಿಗೆ 12 ವರ್ಷ ಪ್ರಾಯ-ವೆಂದು ಹೇಳಲಾಗುತ್ತದೆ. ಅಬೂಬಕರ್(ರ) ಇಸ್ಲಾಮ್ ಸ್ವೀಕರಿಸಿದ ನಂತರ ಇವರನ್ನು ಇಸ್ಲಾಮಿಗೆ ಆಮಂತ್ರಿಸಿ-ದರು. ಅವರು ಇಸ್ಲಾಮ್ ಸ್ವೀಕರಿಸಿದವರಲ್ಲಿ ನಾಲ್ಕನೇ ಅಥವಾ ಐದನೇ ವ್ಯಕ್ತಿಯಾಗಿದ್ದರೆಂದು ಹೇಳಲಾಗುತ್ತದೆ.

## ☆ ಹಿಂಸೆ ಮತ್ತು ಕಿರುಕುಳ:

ಝುಬೈರ್(ರ) ಇಸ್ಲಾಮ್ ಸ್ವೀಕರಿಸಿದ ಸುದ್ದಿ ತಿಳಿದು ಅವರ ಚಿಕ್ಕಪ್ಪ ನೌಫಲ್ ಹೌಹಾರಿದನು. ಅವರನ್ನು ಇಸ್ಲಾಮ್ ತ್ಯಜಿಸುವಂತೆ ನಾನಾ ರೀತಿಯಲ್ಲಿ ಹಿಂಸಿಸಿದನು. ಅವರನ್ನು ಚಾಪೆಯಲ್ಲಿ ಕಟ್ಟಿ ನೇತಾಡಿಸಿ ಕೆಳಗೆ ಹೊಗೆ ಹಾಕುತ್ತಿದ್ದನು. ಆದರೂ ಝುಬೈರ್(ರ) ಇಸ್ಲಾಮ್

ತ್ಯಜಿಸಲು ಸಿದ್ಧರಾಗಲಿಲ್ಲ. ಕೊನೆಗೆ ಅವರು ಎಂದಿಗೂ ಇಸ್ಲಾಮ್ ತೊರೆಯಲಾರರು ಎಂದು ಖಾತ್ರಿಯಾದಾಗ ನೌಫಲ್ ಅವರನ್ನು ಬಿಟ್ಟುಬಿಟ್ಟನು.

ಝುಬೈರ್(ರ) ರವರ ಮಗ ಉರ್ವ ಬಿನ್ ಝುಬೈರ್(ರ) ಹೇಳುತ್ತಾರೆ: ಒಮ್ಮೆ ಮಕ್ಕಾದಲ್ಲಿ ಶತ್ರುಗಳು ಪ್ರವಾದಿ(ಸ) ರನ್ನು ಹಿಡಿದಿದ್ದಾರೆಂಬ ಸುದ್ದಿ ಝುಬೈರ್(ರ) ರಿಗೆ ತಲುಪಿತು. ಅವರು ಕೈಯಲ್ಲಿ ಖಡ್ಗ ಹಿಡಿದುಕೊಂಡು ಧಾವಿಸಿದರು. ಆಗ ಅವರಿಗೆ ಇನ್ನೂ 12 ವರ್ಷ ಪ್ರಾಯ. ಮಕ್ಕಾದ ರಸ್ತೆಯಲ್ಲಿ ಖಡ್ಗ ಹಿಡಿದು ಓಡುತ್ತಿರುವ ಹುಡುಗನನ್ನು ಕಂಡು ಜನರು ದಿಗ್ಭ್ರಾಂತರಾದರು. ಝುಬೈರ್(ರ) ಪ್ರವಾದಿ(ಸ) ರವರ ಬಳಿಗೆ ತಲುಪಿದಾಗ ಪ್ರವಾದಿ(ಸ) ಏಕೆ ಬಂದೆ ಎಂದು ಕೇಳಿದರು. ಅವರು ಹೇಳಿದರು: “ನಿಮ್ಮನ್ನು ಯಾರೋ ಆಕ್ರಮಿಸಿದ್ದಾರೆಂದು ಸುದ್ದಿ ತಿಳಿಯಿತು. ಹಾಗೆ ನಾನು ಓಡೋಡಿ ಬಂದೆ.” ಪ್ರವಾದಿ(ಸ) ಕೇಳಿದರು: “ನೀನೇನು ಮಾಡುತ್ತಿದ್ದೆ?”

ಅವರು ಹೇಳಿದರು: “ನಾನು ಈ ಖಡ್ಗದಿಂದ ಅವರನ್ನು ಕಡಿಯುತ್ತಿದ್ದೆ.” ಹೀಗೆ ಇಸ್ಲಾಮಿಗಾಗಿ ಮೊಟ್ಟಮೊದಲು ಖಡ್ಗವೆತ್ತಿದ್ದು ಝುಬೈರ್ ಎಂಬ ಖ್ಯಾತಿ ಅವರಿಗೆ ಬಂತು.

## ☆ ಹಿಜ್ರ:

ಝುಬೈರ್(ರ) ಅಬಿಸೀನಿಯಾಗೆ ಹಿಜ್ರ ಹೋದವರಲ್ಲಿ ಒಬ್ಬರಾಗಿದ್ದರು. ಆದರೆ ಅವರು ಅಲ್ಲಿ ಹೆಚ್ಚು ಕಾಲ ತಂಗದೆ ಮಕ್ಕಕ್ಕೆ ಮರಳಿದರು. ನಂತರ ಅವರು ಮದೀನಕ್ಕೆ ಹಿಜ್ರ ಹೋದರು. ಹಿಜ್ರ ಮಾಡುವಾಗ ಅವರ ಪತ್ನಿ ಅಸ್ಮಾ ಬಿಂತ್ ಅಬೂಬಕರ್(ರ) ತುಂಬು ಗರ್ಭಿಣಿಯಾಗಿದ್ದರು. ಕುಬಾ ತಲುಪುತ್ತಿದ್ದಂತೆ ಅವರು ಗಂಡು ಮಗುವಿಗೆ ಜನ್ಮ ನೀಡಿದರು. ಆ ಮಗುವೇ ಅಬ್ದುಲ್ಲಾ ಬಿನ್ ಝುಬೈರ್(ರ), ಮದೀನಾದಲ್ಲಿ ಮುಹಾಜಿರ್‌ಗಳಿಗೆ ಜನಿಸಿದ ಮೊದಲ ಮಗು ಇದಾಗಿತ್ತು.

## ☆ ಯುದ್ಧಗಳು:

ಝುಬೈರ್ ಪ್ರವಾದಿ(ಸ) ರವರೊಂದಿಗೆ ಎಲ್ಲ ಯುದ್ಧಗಳಲ್ಲೂ ಪಾಲ್ಗೊಂಡಿದ್ದರು. ಅವರೊಬ್ಬ ಅದ್ವಿತೀಯ ಅಶ್ವ ಸೇನಾನಿಯಾಗಿದ್ದರು. ಯುದ್ಧದ ನಿಮಿತ್ತ ಅವರ ದೇಹದಲ್ಲಿ ಮೂವತ್ತಕ್ಕಿಂತಲೂ ಹೆಚ್ಚು ಖಡ್ಗ, ಈಟಿ ಮತ್ತು ಬಾಣದ ಗುರುತುಗಳಿದ್ದವು. ಹಸನುಲ್ ಬಸ್ರಿ(ರ) ಹೇಳುತ್ತಾರೆ: “ಝುಬೈರ್(ರ) ರವರ ದೇಹದಲ್ಲಿ 30ಕ್ಕಿಂತಲೂ ಹೆಚ್ಚು ಗಾಯಗಳಿದ್ದವು. ಅವೆಲ್ಲವೂ ಪ್ರವಾದಿ(ಸ) ರವರೊಂದಿಗೆ ಯುದ್ಧ ಮಾಡುವಾಗ ಉಂಟಾದ ಗಾಯಗಳಾಗಿದ್ದವು.” ಅಲೀ(ರ) ಝುಬೈರ್(ರ) ರವರ ಖಡ್ಗವನ್ನು ಕೈಯಲ್ಲಿ ಹಿಡಿದು ಹೇಳುತ್ತಿದ್ದರು: “ಈ ಖಡ್ಗ ಪ್ರವಾದಿ(ಸ) ರವರ ಮುಖದಿಂದ ದುಃಖವನ್ನು ನಿವಾರಿಸುತ್ತಲೇ ಇತ್ತು.”

ಬದ್ರ್ ಯುದ್ಧದಲ್ಲಿ ಅವರು ವೀರಾವೇಶದಿಂದ ಹೋರಾಡಿ ಶತ್ರು ಪಕ್ಷದ ನಾಯಕರಲ್ಲೊಬ್ಬರಾದ ಉಬೈದ ಬಿನ್ ಸಈದ್ ಬಿನ್ ಆಸ್ ರನ್ನು ಹತ್ಯೆ ಮಾಡಿ-

ದ್ದರು. ಉಹುದ್ ಯುದ್ಧ ಮುಗಿದ ನಂತರ ಶತ್ರುಗಳು ಪುನಃ ಆಕ್ರಮಣ ಮಾಡದಂತೆ ಅವರ ಹಿಂಭಾಗದಲ್ಲಿ ಹೋಗಲು ಪ್ರವಾದಿ(ಸ) ಆರಿಸಿದ ಎಪ್ಪತ್ತು ಜನರಲ್ಲಿ ಝುಬೈರ್(ರ) ಒಬ್ಬರಾಗಿದ್ದರು. ಆಯಿಶ(ರ) ಉರ್ವ ಬಿನ್ ಝುಬೈರ್(ರ) ರನ್ನು ಕರೆದು ಹೇಳುತ್ತಾರೆ, "ಓ ನನ್ನ ಸಹೋದರಿಯ ಮಗನೇ! ಉಹುದ್ ಯುದ್ಧ ಮುಗಿದು ಶತ್ರುಗಳು ಹಿಂದಿರುಗಿ ಹೋದಾಗ ಅವರು ಪುನಃ ಬರಬಹುದೆಂಬ ಭಯದಿಂದ ಪ್ರವಾದಿ(ಸ) ಕೇಳಿದರು: "ಅವರ ಹಿಂದಿನಿಂದ ಹೋಗಲು ಯಾರಿದ್ದಾರೆ?" ಆಗ ಮುಂದೆ ಬಂದ 70 ಜನರಲ್ಲಿ ಅಬೂಬಕರ್ ಮತ್ತು ನಿನ್ನ ತಂದೆ ಝುಬೈರ್ ಇದ್ದರು." ಮಕ್ಕಾ ವಿಜಯದ ಸಂದರ್ಭ ಪ್ರವಾದಿ(ಸ) ಧ್ವಜ ನೀಡಿದ ಮೂರು ಮುಹಾಜಿರ್‌ಗಳಲ್ಲಿ ಒಬ್ಬರು ಝುಬೈರ್(ರ) ಆಗಿದ್ದರು. ಅಬೂಬಕರ್(ರ) ರವರ ಆಡಳಿತಕಾಲದಲ್ಲಿ ಅವರು ಧರ್ಮಪರಿತ್ಯಾಗಿಗಳ ವಿರುದ್ಧ ಹೋರಾಡಿದರು. ಮದೀನದ ಗಡಿಗಳನ್ನು

ಕಾಯಲು ಅಬೂಬಕರ್(ರ) ನೇಮಿಸಿದ ನಾಲ್ಕು ಜನರಲ್ಲಿ ಝುಬೈರ್(ರ) ಒಬ್ಬರಾಗಿದ್ದರು.

ಯರ್ಮೂಕ್ ಯುದ್ಧದಲ್ಲಿ ಸೈನಿಕರ ಒಂದು ಗುಂಪು ಅವರ ಬಳಿ ಬಂದು ಹೇಳಿದರು: ನೀವು ದಾಳಿ ಮಾಡಿರಿ. ನಾವು ನಿಮ್ಮ ಹಿಂದೆ ಬರುತ್ತೇವೆ. ಅವರು ಹೇಳಿದರು: "ನೀವು ಸ್ಥಿರವಾಗಿ ನಿಲ್ಲಬೇಕು." ಅವರು ಒಪ್ಪಿಕೊಂಡರು. ಆಗ ಝುಬೈರ್(ರ) ಬಿರುಗಾಳಿಯಂತೆ ಕುದುರೆಯೋ-ಡಿಸುತ್ತಾ ರೋಮನ್ ಸೈನಿಕರ ದಂಡಿನೊಳಗೆ ನುಗ್ಗಿ ಏನಾಗುತ್ತಿದೆ ಎಂದು ತಿಳಿಯುವುದಕ್ಕೆ ಮೊದಲೇ ಆ ಕಡೆಯಿಂದ ಹೊರಬಂದರು. ಅದೇ ರೀತಿ ಎರಡು ಮೂರು ಬಾರಿ ಮಾಡಿದರು. ಆ ಯುದ್ಧದಲ್ಲಿ ಅವರಿಗೆ ಅನೇಕ ಗಾಯಗಳಾಗಿದ್ದವು.

ಅಮ್ರ್ ಬಿನ್ ಆಸ್(ರ) ಈಜಿಪ್ಟಿಗೆ ದಂಡೆತ್ತಿ ಹೋಗುವಾಗ ಉಮರ್(ರ) ರಲ್ಲಿ ಸಹಾಯ ಕೇಳಿದರು. ಉಮರ್(ರ) ಝುಬೈರ್(ರ) ರನ್ನು ಸೇನೆಯೊಂದಿಗೆ ಕಳುಹಿಸಿದರು.

ಅದರಲ್ಲಿ 12,000 ಸೈನಿಕರಿದ್ದರೆಂದು ಹೇಳಲಾಗುತ್ತದೆ. ಆ ಸೇನೆಯಲ್ಲಿ ಹಿರಿಯ ಸಹಾಬಾಗಳಾದ ಉಬಾದ ಬಿನ್ ಸಾಮಿತ್, ಮಿಕ್ದಾದ್ ಬಿನ್ ಅಸ್ವದ್ ಮಸ್ಲಮ ಮುಂತಾದವರಿದ್ದರು.

ಉಮರ್(ರ) ತಮ್ಮ ಮರಣಕ್ಕೆ ಮುಂಚೆ ಖಲೀಫ ಆಗಲು ನಿಶ್ಚಯಿಸಿದ ಆರು ಮಂದಿಯಲ್ಲಿ ಝುಬೈರ್(ರ) ಒಬ್ಬರಾಗಿದ್ದರು. ಆದರೆ ನಂತರ ಅವರು ಅದನ್ನು ಅಲೀ(ರ) ರಿಗೆ ಬಿಟ್ಟುಕೊಟ್ಟರು.

## ☆ ಜಮಲ್ ಯುದ್ಧ:

ಉಸ್ಮಾನ್(ರ) ಕೊಲೆಯಾದಾಗ ಅವರಿಗೆ ಸಹಾಯ ಮಾಡಲು ಸಾಧ್ಯವಾಗದ ಕಾರಣ ದುಃಖಿಸಿದ ಸಹಾಬಾಗಳಲ್ಲೊಬ್ಬರು ಝುಬೈರ್(ರ) ಆಗಿದ್ದರು. ಅವರು ಉಸ್ಮಾನ್(ರ) ರವರ ಕೊಲೆಗಾರರ ವಿರುದ್ಧ ಪ್ರತೀಕಾರ ತೀರಿಸುವುದಾಗಿ ನಿರ್ಧರಿಸಿದರು. ಅಲೀ(ರ) ರಿಗೆ ಬೈಅತ್

ಮಾಡಿದ ಬಳಿಕ ಅವರು ಮತ್ತು ತಲ್ಹ(ರ) ಅಲೀ(ರ) ರೊಂದಿಗೆ ಪ್ರತೀಕಾರ ತೀರಿಸುವಂತೆ ಆವಶ್ಯಪಟ್ಟರು. ಆದರೆ ಅಲೀ(ರ) ಅವರನ್ನು ಸಮಾಧಾನಪಡಿಸಿದರು. ಏಕೆಂದರೆ ಉಸ್ಮಾನ್(ರ) ರವರ ಕೊಲೆಗಾರರನ್ನು ಪತ್ತೆಹಚ್ಚಿ ಪ್ರತೀಕಾರ ತೀರಿಸುವುದು ಅಷ್ಟು ಸುಲಭವಾಗಿರಲಿಲ್ಲ. ಹೀಗೆ ನಾಲ್ಕು ತಿಂಗಳು ಕಳೆಯಿತು. ಅಲೀ(ರ) ಯಾವುದೇ ಪ್ರತೀಕಾರ ತೀರಿಸುವುದು ಕಾಣದೇ ಹೋದಾಗ ತಲ್ಹ(ರ) ಮತ್ತು ಝುಬೈರ್(ರ) ಮಕ್ಕಕ್ಕೆ ಹೋಗಿ ಆಯಿಶ(ರ) ರನ್ನು ಭೇಟಿಯಾದರು. ಉಸ್ಮಾನ್(ರ) ರವರ ಕೊಲೆಗಾರರನ್ನು ನ್ಯಾಯದ ಮುಂದೆ ತರದಿದ್ದರೆ ಅವರು ಬೆಳೆದು ನಂತರ ಇತರ ಖಲೀಫರುಗಳನ್ನೂ ಹೀಗೆಯೇ ಕೊಲೆ ಮಾಡಬಹುದು. ಅವರಿಂದ ಇಸ್ಲಾಮಿ ಸಾಮ್ರಾಜ್ಯಕ್ಕೆ ಖಂಡಿತ ಬೆದರಿಕೆಯಿದೆ ಎನ್ನುವುದು ಇವರ ಅಭಿಪ್ರಾಯವಾಗಿತ್ತು.

ತಲ್ಹ(ರ), ಝುಬೈರ್(ರ) ಮತ್ತು ಆಯಿಶ(ರ) ಬಸ್ರಕ್ಕೆ ಹೋಗಿ ಅಲ್ಲಿನ ಜನರ ಸಹಾಯದಿಂದ ಉಸ್ಮಾನ್(ರ)

ರವರ ಕೊಲೆಗಾರರ ವಿರುದ್ಧ ಪ್ರತೀಕಾರ ತೀರಿಸು-ವುದೆಂದು ನಿರ್ಧರಿಸಿದರು. ಬಸ್ರದ ರಾಜ್ಯಪಾಲ ಉಸ್ಮಾನ್ ಬಿನ್ ಹುನೈಫ್(ರ) ಅವರ ಆಗಮನದ ಬಗ್ಗೆ ವಿಚಾರಿಸಿದಾಗ ಆಯಿಶ(ರ) ಹೇಳಿದರು: "ಅಲ್ಲಾಹನಾಣೆ! ನನ್ನಂತಹ ಸ್ಥಾನದಲ್ಲಿರುವ ಒಬ್ಬ ಮಹಿಳೆ ಒಂದು ಸ್ಪಷ್ಟ ಕಾರಣ ಇಲ್ಲದೆ ಮತ್ತು ಆ ಕಾರಣವನ್ನು ತನ್ನ ಮಕ್ಕಳಿಗೆ (ಮುಸಲ್ಮಾನರಿಗೆ) ಸ್ಪಷ್ಟಪಡಿಸಿಕೊಡದೆ ಮನೆಯಿಂದ ಹೊರಬರಬಾರದು. ವಿಭಿನ್ನ ಪ್ರದೇಶಗಳಿಂದ ಬಂದ ಕಿಡಿಗೇಡಿಗಳು ಪ್ರವಾದಿ(ಸ) ರವರ ಹರಮ್‌ನಲ್ಲಿ ನುಸುಳಿ ಮಾಡಬಾರದ ಅನ್ಯಾಯಗಳನ್ನು ಮಾಡಿದ್ದಾರೆ. ಅವರು ಅಲ್ಲಿ ದುಷ್ಕರ್ಮಿಗಳಿಗೆ ಆಶ್ರಯ ನೀಡಿದ್ದಾರೆ. ಅಲ್ಲಾಹು ಮತ್ತು ಅವನ ರಸೂಲರ(ರ) ಶಾಪಕ್ಕೆ ಅವರು ಅರ್ಹರಾ-ಗಿದ್ದಾರೆ. ಏಕೆಂದರೆ ಅವರು ಮುಸಲ್ಮಾನರ ಅಮೀರರನ್ನು ಅನ್ಯಾಯವಾಗಿ ಕೊಂದಿದ್ದಾರೆ. ಅವರು ಅನ್ಯಾಯವಾಗಿ ರಕ್ತ ಹರಿಸಿದ್ದಾರೆ, ಧನವನ್ನು ದೋಚಿದ್ದಾರೆ ಮತ್ತು ಪವಿತ್ರ

ಹರಮ್ ಹಾಗೂ ಪವಿತ್ರ ತಿಂಗಳ ಪಾವಿತ್ರ್ಯತೆಯನ್ನು ಉಲ್ಲಂಘಿಸಿದ್ದಾರೆ. ಅವರು ಯಾವ ಸ್ಥಳದಲ್ಲಿ ಇರಬಾರ-ದೋ ಆ ಸ್ಥಳದಲ್ಲಿ ಇದ್ದಾರೆ. ಅವರಿಂದ ಹಾನಿಯಲ್ಲದೆ ಯಾವುದೇ ಉಪಕಾರವಿಲ್ಲ. ನಾನು ಬಂದಿರುವುದು ಅವರ ಬಗ್ಗೆ ಮುಸಲ್ಮಾನರಿಗೆ ಎಚ್ಚರಿಕೆ ನೀಡಲು ಮತ್ತು ನಮ್ಮ ಹಿಂದಿರುವ ಜನರು ಅನುಭವಿಸುತ್ತಿರುವ ನೋವು ಮತ್ತು ಸಂಕಟವನ್ನು ತಿಳಿಸುವುದಕ್ಕಾಗಿದೆ. ಮತ್ತು ಮುಸಲ್ಮಾನರು ಈ ವಿಷಯದಲ್ಲಿ ಏನು ಮಾಡಬೇಕೆಂದು ಹೇಳುವುದಕ್ಕಾಗಿದೆ." ನಂತರ ಅವರು ಈ ಆಯತ್ತನ್ನು ಪಾರಾಯಣ ಮಾಡಿದರು: "ಅವರ ಹೆಚ್ಚಿನ ಗೂಢ ಮಾತುಕತೆಗಳಲ್ಲಿ ಯಾವುದೇ ಒಳಿತಿಲ್ಲ. ಆದರೆ ದಾನ ಮಾಡಲು, ಸದಾಚಾರ ಕೈಗೊಳ್ಳಲು ಮತ್ತು ಜನರ ಮಧ್ಯೆ ಸುಧಾರಣೆ ಮಾಡಲು ಆದೇಶಿಸುವವರಲ್ಲದೆ." (ಅನ್ನಿಸಾ 114)

ನಂತರ ಅವರು ಹೇಳಿದರು: "ಅಲ್ಲಾಹು ಮತ್ತು ಅವನ

ರಸೂಲರು(ರ) ಹಿರಿಯರು, ಕಿರಿಯರು, ಗಂಡು, ಹೆಣ್ಣು ಮುಂತಾದ ಎಲ್ಲರಿಗೂ ಆದೇಶಿಸಿದಂತೆ ಸುಧಾರಣೆ ಉಂಟು ಮಾಡಲು ನಾವು ಹೊರಟು ಬಂದಿದ್ದೇವೆ. ನಮ್ಮ ಉದ್ದೇಶ ಇದಾಗಿದೆ. ನಾವು ನಿಮಗೆ ಆದೇಶಿಸುವ ಮತ್ತು ಉತ್ತೇಜಿಸುವ ಸದಾಚಾರ ಇದಾಗಿದೆ. ನಾವು ನಿಮಗೆ ವಿರೋಧಿಸುವ ಮತ್ತು ಬದಲಾವಣೆ ಮಾಡಬೇಕೆಂದು ಉತ್ತೇಜಿಸುವ ದುರಾಚಾರವು ಇದಾಗಿದೆ."

ನಂತರ ಅಲ್ಲಿ ಅವರ ಮತ್ತು ಉಸ್ಮಾನ್(ರ) ರವರ ಕೊಲೆಗಾರರಲ್ಲೊಬ್ಬರಾದ ಹುಕೈಮ್ ಬಿನ್ ಜಬ್ಲರ ನಡುವೆ ತೀವ್ರ ಯುದ್ಧ ನಡೆಯಿತು. ಯುದ್ಧದಲ್ಲಿ ಆಯಿಶ(ರ) ರ ಸೇನೆ ದುಷ್ಕರ್ಮಿಗಳನ್ನು ಸದೆಬಡಿದು ಬಸ್ರವನ್ನು ವಶಪಡಿಸಿತು. ಬಸ್ರದ ರಾಜ್ಯಪಾಲ ಉಸ್ಮಾನ್ ಬಿನ್ ಹುನೈಫ್(ರ) ಮದೀನಕ್ಕೆ ಹೋದರು.

ಆ ಸಮಯದಲ್ಲಿ ಅಲೀ(ರ) ತನಗೆ ಬೈಅತ್ ಮಾಡಲು ಒಪ್ಪದ ಮುಆವಿಯ(ರ) ರ ಬಳಿಗೆ ಸೇನೆಯೊಂದಿಗೆ

ಹೊರಡುವ ಸಿದ್ಧತೆಯಲ್ಲಿದ್ದರು. ಆಗ ತಲ್ಹ(ರ), ಝುಬೈರ್(ರ) ಮತ್ತು ಆಯಿಶ(ರ) ಬಸ್ರಕ್ಕೆ ಹೊರಟ ಸುದ್ದಿ ತಿಳಿದು ಅವರು ನೇರವಾಗಿ ಬಸ್ರಕ್ಕೆ ಹೋಗುತ್ತಾರೆ. ಅಲ್ಲಿ ಅವರು ಸಂದಾನ ಮಾಡಲು ಕಅಕಾಅ್(ರ) ರನ್ನು ಕಳುಹಿಸುತ್ತಾರೆ. ಕಅಕಾಅ್(ರ) ತಲ್ಹ(ರ) ಮತ್ತು ಝುಬೈ-ರ್(ರ) ರವರ ಬಳಿ ಬಂದು ಕೇಳುತ್ತಾರೆ: "ಹೇಳಿ, ನೀವೇಕೆ ಇಲ್ಲಿಗೆ ಬಂದಿರಿ?" ಅವರು ಹೇಳುತ್ತಾರೆ: "ಸುಧಾರಣೆ ಮಾಡಲು." ಕಅಕಾಅ(ರ) ಕೇಳುತ್ತಾರೆ: "ನೀವು ಹೇಗೆ ಸುಧಾರಣೆ ಮಾಡುತ್ತೀರಿ ಎಂದು ಹೇಳಿ. ನಾನು ಕೂಡ ನಿಮ್ಮ ಜೊತೆ ಸೇರುತ್ತೇನೆ." ಅವರು ಹೇಳುತ್ತಾರೆ. "ಉಸ್ಮಾನ್(ರ) ರವರ ಕೊಲೆಗಾರರಿಗೆ ಶಿಕ್ಷೆಯಾಗಬೇಕು. ಅವರನ್ನು ಹಾಗೆಯೇ ಬಿಟ್ಟರೆ ನಾವು ಕುರ್‌ಆನನ್ನು ತೊರೆದವರಂತೆ ಆಗುತ್ತೇವೆ." ಕಅಕಾಅ್(ರ) ಹೇಳಿದರು: "ಬಸ್ರದಲ್ಲಿ ಉಸ್ಮಾನ್(ರ) ರವರ ಕೊಲೆಗಾರರ ಪೈಕಿ 600 ಜನರಿದ್ದರು. ನೀವು ಅವರೆಲ್ಲರನ್ನೂ ಕೊಂದಿರಿ.

ಆದರೆ ಹರ್ಕುಸ್ ಬಿನ್ ಝುಹೈರ್ ಎಂಬಾತ ಓಡಿ ತಪ್ಪಿಸಿಕೊಂಡ. ಆತ ನೇರವಾಗಿ ಬನೂ ಸಅದ್ ಗೋತ್ರದವರೊಂದಿಗೆ ಆಶ್ರಯ ಬೇಡಿಕೊಂಡ. ನೀವು ಅವನನ್ನು ಕೊಲ್ಲಲು ಹೊರಟಾಗ ಅವನ ಗೋತ್ರದವರು ನಿಮ್ಮನ್ನು ತಡೆದರು. ಅವನ ಪರವಾಗಿ 6,000 ಜನರು ಕೋಪೋದ್ರಿಕ್ತರಾಗಿ ನಿಮ್ಮ ವಿರುದ್ಧ ನಿಂತರು. ನೀವು ಹರ್ಕುಸ್‌ನನ್ನು ಕೊಲ್ಲದೆ ಬಿಟ್ಟುಬಿಡುವುದಾದರೆ ನೀವು ಅಲಿ(ರ) ಏನು ಮಾಡಬೇಕೆಂದು ಕೇಳುತ್ತಿದ್ದೀರೋ ಅದನ್ನು ನೀವೇ ಬಿಟ್ಟುಬಿಡುತ್ತಿದ್ದೀರಿ. ಇನ್ನು ನೀವು ಆತನನ್ನು ಕೊಲ್ಲಬೇಕೆಂದು ನಿರ್ಧರಿಸಿದರೆ ಸಂಪೂರ್ಣ ಬನೂ ಸಅದ್ ಗೋತ್ರ ನಿಮ್ಮ ವಿರುದ್ಧ ನಿಲ್ಲುತ್ತದೆ. ನೀವು ಅವರ ವಿರುದ್ಧ ಯುದ್ಧ ಸಾರಿದರೆ ಅವರಿಗೆ ಬೆಂಬಲವಾಗಿ ರಬೀಅ ಮತ್ತು ಮುದರ್ ಗೋತ್ರಗಳು ಎದ್ದು ನಿಲ್ಲುತ್ತವೆ. ಇದರಿಂದ ಶತ್ರುಗಳಿಗೆ ಇನ್ನೂ ಹೆಚ್ಚು ಬಲ ಬರುತ್ತದೆ. ನೀವು ಏನು ಸಾಧಿಸಲು ಹೊರಟಿದ್ದೀರೋ ಅದಕ್ಕೆ

ವಿರುದ್ಧವಾದುದು ಸಂಭವಿಸುತ್ತದೆ. ಅಲೀ(ರ) ರವರ ಸೇ-ನೆಯಲ್ಲಿರುವ ಉಸ್ಮಾನ್(ರ) ರವರ ಕೊಲೆಗಾರರ ವಿರುದ್ಧ ಸಮರ ಸಾರಲು ಅಲೀ(ರ) ರವರಿಗೆ ತೊಡಕಾಗಿರುವುದು ಇದೇ ಆಗಿದೆ."

## ☆ ಮರಣ:

ತಲ್ಹ ಮತ್ತು ಝುಬೈರ್(ರ) ರಿಗೆ ವಿಷಯ ಅರ್ಥವಾಗಿ ಅವರು ತಮ್ಮ ಉದ್ದೇಶದಿಂದ ಹಿಂದೆ ಸರಿದರು. ಇದರಿಂದ ವಾತಾವರಣ ತಿಳಿಯಾಯಿತು. ಆದರೆ ಉಸ್ಮಾನ್(ರ) ರವರ ಕೊಲೆಗಾರರಿಗೆ ಇದು ಅಸಹನೀಯ-ವಾಗಿತ್ತು. ಸಹಾಬಿಗಳ ನಡುವೆ ಯುದ್ಧ ಸಂಭವಿಸುವುದು ಅವರಿಗೆ ಬೇಕಾಗಿತ್ತು. ಎರಡು ಸೈನ್ಯಗಳು ಯುದ್ಧ ಮಾಡುವಂತೆ ಅವರು ಪಿತೂರಿ ಮಾಡಿದರು. ಯುದ್ಧದಲ್ಲಿ ತಲ್ಹ(ರ) ಅಸುನೀಗಿದರು. ಝುಬೈರ್(ರ) ಯುದ್ಧರಂಗವನ್ನು ಬಿಟ್ಟು ಹೊರಟು ಹೋದರು. ಅವರು ಮದೀನಕ್ಕೆ ಹೊರಡುವ ಹಾದಿಯಲ್ಲಿ ದಾರಿ

ಮಧ್ಯೆ ನಮಾಝ್ ಮಾಡುತ್ತಿದ್ದಾಗ ಇಬ್ನ್ ಜರ್ಮೂಝ್ ಎಂಬಾತ ಅವರನ್ನು ಕೊಲೆ ಮಾಡಿದನು.

## ☆ ಪತ್ನಿಯರು:

1. ಅಸ್ಮಾ ಬಿನ್ತ್ ಅಬೂಬಕರ್(ರ)
2. ಉಮ್ಮು ಖಾಲಿದ್ ಬಿನ್ತ್ ಖಾಲಿದ್ ಬಿನ್ ಸಈದ್
3. ರಬ್ಬಾಬ್ ಬಿನ್ ಉನೈಫ್
4. ಝೈನಬ್ ಬಿನ್ತ್ ಮರ್ಸದ್
5. ಉಮ್ಮು ಕುಲ್ಸೂಮ್ ಬಿನ್ತ್ ಉಕ್ಬ
6. ಹಿಲಾಲ್ ಬಿನ್ತ್ ಕೈಸ್
7. ಆತಿಕ ಬಿನ್ತ್ ಝೈದ್

## ☆ ಮಕ್ಕಳು:

### ಗಂಡು ಮಕ್ಕಳು

1. ಅಬ್ದುಲ್ಲಾ (ತಾಯಿ: ಅಸ್ಮಾ ಬಿನ್ತ್ ಅಬೂಬಕರ್)
2. ಮುಂಝಿರ್ (ತಾಯಿ: ಅಸ್ಮಾ ಬಿನ್ತ್ ಅಬೂಬಕರ್)

3. ಆಸಿಮ್ (ತಾಯಿ: ಅಸ್ಮಾ ಬಿನ್ತ್ ಅಬೂಬಕರ್)
4. ಮುಹಾಜಿರ್ (ತಾಯಿ: ಅಸ್ಮಾ ಬಿನ್ತ್ ಅಬೂಬಕರ್)
5. ಉರ್ವ (ತಾಯಿ: ಅಸ್ಮಾ ಬಿನ್ತ್ ಅಬೂಬಕರ್)
6. ಖಾಲಿದ್ (ತಾಯಿ: ಉಮ್ಮು ಖಾಲಿದ್ ಬಿನ್ತ್ ಖಾಲಿದ್)
7. ಉಮರ್ (ತಾಯಿ: ಉಮ್ಮು ಖಾಲಿದ್ ಬಿನ್ತ್ ಖಾಲಿದ್)

## ಹೆಣ್ಣು ಮಕ್ಕಳು

1. ಖದೀಜ (ತಾಯಿ: ಅಸ್ಮಾ ಬಿನ್ತ್ ಅಬೂಬಕರ್)
2. ಉಮ್ಮುಲ್ ಹಸನ್ (ತಾಯಿ: ಅಸ್ಮಾ ಬಿನ್ತ್ ಅಬೂಬಕರ್)
3. ಆಯಿಶ (ತಾಯಿ: ಅಸ್ಮಾ ಬಿನ್ತ್ ಅಬೂಬಕರ್)
4. ಝೈನಬ್ (ತಾಯಿ: ಉಮ್ಮು ಕುಲ್ಸೂಮ್ ಬಿನ್ತ್ ಉಕ್ಬ)
5. ಖದೀಜ (ತಾಯಿ: ಹಿಲಾಲ್ ಬಿನ್ತ್ ಕೈಸ್)
6. ಹಬೀಬ (ತಾಯಿ: ಉಮ್ಮು ಖಾಲಿದ್ ಬಿನ್ತ್ ಖಾಲಿದ್)
7. ಸೌದಾ (ತಾಯಿ: ಉಮ್ಮು ಖಾಲಿದ್ ಬಿನ್ತ್ ಖಾಲಿದ್)
8. ಹಿಂದ್ (ತಾಯಿ: ಉಮ್ಮು ಖಾಲಿದ್ ಬಿನ್ತ್ ಖಾಲಿದ್)